ಕೆ. ಜಗನ್ನಾಥಶಾಸ್ತ್ರಿ

# ಕಲಿಸೆನಾಡು : ಒಂದು ಟಿಪ್ಪಣಿ

ನಾಡಕಲಸಿ–ಈಗ ಒಂದು ಹಳ್ಳಿ. ಇದು ಶಿವಮೊಗ್ಗ ಜಿಲ್ಲೆ, ಸಾಗರ ತಾಲ್ಲೂಕಿನಲ್ಲಿದೆ. ಇದು ಸುಮಾರು ೮೦೦ ವರ್ಷಗಳ ಹಿಂದೆ 'ಕಲಿಸೆ ನಾಡು' ಎಂಬ ಚಿಕ್ಕನಾಡಿನ ರಾಜಧಾನಿಯಾಗಿತ್ತು. ಈ ನಾಡನ್ನೂ ಈ ನಾಡಿನ ಅಧಿಪತಿಯಾಗಿದ್ದ ಮತ್ತು ಕಲಾಭಿಮಾನಿಯಾಗಿದ್ದ ಮಾಂಡಲಿಕನೊಬ್ಬನನ್ನು ಪರಿಚಯ ಮಾಡಿಕೊಡುವುದು ಈ ಪ್ರಬಂಧದ ಉದ್ದೇಶ.

ಕ್ರಿಸ್ತಶಕ ಏಳನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ, ಸಾಂತಾರರು ಹೊಂಬುಚವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಪೊಟ್ಟಿ ಪೊಂಬುರ್ಚನಾಡನ್ನು ಆಳಿದರು. ಈ ರಾಜ್ಯದ ಸ್ಥಾಪಕ ಜಿನದತ್ತರಾಯ.[1] ಜಿನದತ್ತರಾಯ ಉತ್ತರ ಭಾರತದವನು. ಅವನು ಈ ಪ್ರದೇಶಕ್ಕೆ ಬರುವ ಮುನ್ನ ಈ ಪ್ರದೇಶವನ್ನು ಬೇಡರ ನಾಯಕನು ಆಳುತ್ತಿದ್ದನು.[2] ಆಗ ಇಲ್ಲಿ ಕನಕಪುರ ಎಂಬ ಊರು ಇತ್ತು. ಆಗ ಆಳುತ್ತಿದ್ದ ರಾಜನ ಹೆಸರು ಕನಕನಾಯಕ. ಇವನು ಇಲ್ಲಿಯೇ ಇದ್ದ ಭಿಲ್ಲೇಶ್ವರ ದೇವರ ಭಕ್ತನಾಗಿದ್ದ.

ಜಿನದತ್ತರಾಯನಿಗೆ ಕನಕನಾಯಕ ರಾಜ್ಯವನ್ನು ಒಪ್ಪಿಸಿದ. ಪದ್ಮಾವತಿದೇವಿಯ ಅಪ್ಪಣೆಯಂತೆ ಜಿನದತ್ತರಾಯ ಇಲ್ಲಿ ಒಂದು ಪಟ್ಟಣವನ್ನು ಕಟ್ಟಿದ. ಅದನ್ನು ಪೊಂಬುರ್ಚ ಎಂದು ಹೆಸರಿಟ್ಟ. ಅಲ್ಲದೆ ಒಂದು ಪದ್ಮಾವತಿ ದೇವಿಗಾಗಿ ಒಂದು ದೇವಾಲಯವನ್ನೂ ಕಟ್ಟಿಸಿದ.[3] ಅನಂತರ ಕನಕನಾಯಕ ತನ್ನ ಪರಿವಾರದೊಂದಿಗೆ, ಆ ಪ್ರದೇಶವನ್ನು ಬಿಟ್ಟು, ಸಾಗರ ತಾಲ್ಲೂಕಿನ ಹೊಸಗುಂದಕ್ಕೆ ಬಂದು ನೆಲಸಿರಬಹುದು. ಕೆಲವು ದಿನ ಕಳೆದ ನಂತರ, ಕೆಲವರು ಹೊಸಗುಂದದಿಂದ ಸುಮಾರು ಹತ್ತು ಮೈಲಿಗಳಷ್ಟು ದೂರದಲ್ಲಿರುವ ಕಲಿಸೆ ಎಂಬ ಊರಿಗೂ ಬಂದು ನೆಲಸಿರಬಹುದು.

ಹನ್ನೆರಡನೆಯ ಶತಮಾನದಲ್ಲಿ ಪೊಂಬುರ್ಚದ ಸಾಂತಾರರು, ಹೊಯ್ಸಳರಿಗೆ ಸೋತು ಕಳಸಕ್ಕೆ ಹೋದ ನಂತರ, ಹೊಸಗುಂದ ಮತ್ತು ಕಲಿಸೆಗಳಲ್ಲಿದ್ದ ಕನಕನಾಯಕನ ವಂಶಸ್ಥರು ತಲೆ ಎತ್ತಿ ಹೊಸಗುಂದನಾಡು ಮತ್ತು ಕಲಿಸೆನಾಡು–ಇವನ್ನು ಆಳಿರಬಹುದು.

ಹನ್ನೆರಡನೆಯ ಶತಮಾನದಿಂದ ಹದಿಮೂರನೆಯ ಶತಮಾನದ ಉತ್ತರಾರ್ಧದವರೆಗೆ ಹೊಸಗುಂದದ ನಾಡು ಸ್ವತಂತ್ರವಾಗಿ ಅಸ್ತಿತ್ವದಲ್ಲಿದ್ದಂತೆ ಶಾಸನಗಳಿಂದ ತಿಳಿದುಬರುತ್ತದೆ.[4] ಕಲಿಸೆನಾಡು ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಅಸ್ತಿತ್ವದಲ್ಲಿದ್ದು, ಹೊಯ್ಸಳ

1 *EC*., VIII, Na. 35, 48
2 ಭಿಲ್ಲೇಶ್ವರ ಮಹಾತ್ಮೆ (ಅಪ್ರಕಟಿತ ಪದ್ಯಕಾವ್ಯ)
3 ಪದ್ಮಾವತಿ ಮಹಾತ್ಮೆ
4 *EC*., Sa. 67

ಚಕ್ರವರ್ತಿಗಳ ಅಧೀನದಲ್ಲಿ ಮಾಂಡಲಿಕರ ಒಡೆತನಕ್ಕೆ ಒಳಪಟ್ಟ ನಾಡಾಗಿ ಇದ್ದುದು ಶಾಸನಗಳಿಂದ ತಿಳಿದು ಬರುತ್ತದೆ.[5]

ಹೊಸಗುಂದನಾಡಿನ ಮೊದಲನೆಯ ಅರಸ ಬೊಮ್ಮರಸ; ಲಚ್ಚಿಯಬ್ಬೆ ಆತನ ಹೆಂಡತಿ. ಕಾಳರಸ, ತಮ್ಮರಸ ಎಂಬ ಇಬ್ಬರು ಗಂಡುಮಕ್ಕಳು ; ಕೆಳೆಯಬ್ಬರಸಿ ಮಗಳು. ಕೆಳೆಯಬ್ಬರಸಿಗೆ ಬೀಯಬ್ಬರಸಿ ಎಂಬ ಮಗಳಿದ್ದಳು. ಇವಳ ಗಂಡ ಪಡುವಳ ಗೊಂಗಣ. ಇವರಿಗೆ ಬಾಳೆಯಮ್ಮ ವೆಗ್ಗಡೆ ಎಂಬ ಮಗನಿದ್ದನು.[6]

ಇದೇ ಸಮಯದಲ್ಲಿ ಕಲಿಸೆನಾಡನ್ನು ಬಲ್ಲ ವೆಗ್ಗಡೆ ಎಂಬುವನು ಆಳುತ್ತಿದ್ದನು. ಪಡುವಳ ಗೊಂಗಣನ ಮಗನಾದ ಬಾಳೆಯಮ್ಮ ವೆಗ್ಗಡೆ ಬಲ್ಲ ವೆಗ್ಗಡೆಯ ಅಳಿಯನಾದನು. ಬಲ್ಲವೆಗ್ಗಡೆಯ ನಂತರ, ಬಾಳೆಯಮ್ಮ ವೆಗ್ಗಡೆಯೇ ಕಲಿಸೆನಾಡಿನ ಅರಸನಾದನು. ಬಲ್ಲ ವೆಗ್ಗಡೆಯ ಬಗ್ಗೆ ಹೆಚ್ಚಿಗೆ ಏನೂ ತಿಳಿಯುವುದಿಲ್ಲ. ಬಾಳೆಯಮ್ಮ ವೆಗ್ಗವ ಮತ್ತು ಅನಂತರ ಕಲಿಸೆನಾಡನ್ನು ಆಳಿದ ಮಾಂಡಲಿಕರು, ತಾವು ಭಿಲ್ಲೇಶ್ವರದಲ್ಲಿರುವ ಭಿಲ್ಲೇಶ್ವರ ದೇವರ ಪಾದಪದ್ಮಾರಾಧಕರೆಂದು ಕರೆದುಕೊಂಡಿದ್ದಾರೆ.[7]

ಕ್ರಿಸ್ತಶಕ ೧೨೧೮ರ ಶಾಸನವು ಬಾಳೆಯಮ್ಮ ವೆಗ್ಗಡೆಯು ಹೊಯ್ಸಳ ಇಮ್ಮಡಿ ವೀರಬಲ್ಲಾಳನ ಮಾಂಡಲಿಕನಾಗಿದ್ದನೆಂದೂ ಕ್ರಿ.ಶ. ೧೨೧೮ರಲ್ಲಿ ಅಂದರೆ, ಶಕವರ್ಷ ೧೧೪೦ನೆಯ ಬಹುಧಾನ್ಯ ನಾಮ ಸಂವತ್ಸರದ ಆಶ್ವಯುಜ ಶುದ್ಧ ೫ರಂದು, ಕಲಿಸೆಯಲ್ಲಿ ಸೋಮನಾಥ ದೇವಾಲಯವನ್ನು ಕಟ್ಟಿಸಿದನೆಂದೂ ತಿಳಿಸುತ್ತದೆ.[8]

ಬಾಳೆಯಮ್ಮ ವೆಗ್ಗಡೆಯ ನಂತರ ಕಲಿಸೆನಾಡನ್ನು ಬೀರದೇವರಸ ಆಳಿದನು. ಆಗ ಬೊಮ್ಮರಸ ಎಂಬುವನು ಹೊಂಬುಚವನ್ನು ಆಳುತ್ತಿದ್ದನು. ಆಗ ಬೀರದೇವರಸನು ಹೊಂಬುಚಕ್ಕೆ ಧಾಳಿಯಿಟ್ಟು ಬೊಮ್ಮರಸನನ್ನು ಸೋಲಿಸಿದ್ದೇ ಅಲ್ಲದೆ, ಅಲ್ಲಿನ ಸಮಸ್ತ ವಸ್ತುಗಳನ್ನೂ ಕೊಳ್ಳೆ ಹೊಡೆದುಕೊಂಡು ಬಂದನೆಂದು ಕ್ರಿ.ಶ. ೧೨೪೮ರ ಶಾಸನ ತಿಳಿಸುತ್ತದೆ.[9]

ಬೀರದೇವರಸನ ನಂತರ ಈ ನಾಡು ಹೊಯ್ಸಳ ರಾಜ್ಯದಲ್ಲಿ ಐಕ್ಯವಾಗಿ, ತನ್ನ ಸ್ವತಂತ್ರ ಅಸ್ತಿತ್ವವನ್ನು ಕಳೆದುಕೊಂಡಿತು. ಕ್ರಿ.ಶ. ೧೪೯೯ರಲ್ಲಿ ವಿಜಯನಗರದ ಚಕ್ರವರ್ತಿಯಾದ ಕೃಷ್ಣದೇವರಾಯನು. ಕೆಳದಿ ಸ್ಥಾಪಕನಾದ ಚೌಡಪ್ಪನಾಯಕನಿಗೆ ಇತರ ನಾಡುಗಳೊಂದಿಗೆ, ಈ ಕಲಿಸೆನಾಡನ್ನೂ ಬಳುವಳಿಯಾಗಿ ಕೊಟ್ಟನು.[10]

ಈ ನಾಡಿನ ರಾಜಧಾನಿಯಾಗಿದ್ದ ಕಲಿಸೆ, ಈಗ ನಾಡಕಲಿಸೆ ಎಂಬ ಹೆಸರಿನ ಸಣ್ಣಗ್ರಾಮವಾಗಿದೆ. ಇಲ್ಲಿ ಎರಡು ದೇವಾಲಯಗಳಿವೆ.ಒಂದು ರಾಮೇಶ್ವರ ದೇವಾಲಯ ; ಮತ್ತೊಂದು ಮಲ್ಲಿಕಾರ್ಜುನ ದೇವಾಲಯ. ರಾಮೇಶ್ವರ ದೇವಾಲಯವೇ ಬಾಳೆಯಮ್ಮ ವೆಗ್ಗಡೆ ಕಟ್ಟಿಸಿದ ಸೋಮೇಶ್ವರ ದೇವಾಲಯ. ಮಲ್ಲಿಕಾರ್ಜುನ ದೇವಾಲಯದ ಬಗ್ಗೆ ಐತಿಹಾಸಿಕವಾಗಿ ಏನೂ ತಿಳಿದು ಬರುವುದಿಲ್ಲ, ಈ ಎರಡೂ ನಕ್ಷತ್ರಾಕಾರದ ವೇದಿಕೆಯ ಮೇಲೆ ಕಟ್ಟಲ್ಪಟ್ಟವೆ. ಎರಡರಲ್ಲಿಯೂ ಗರ್ಭಗೃಹ, ಸುಖನಾಸಿ, ನವರಂಗ ಇವೆ. ಮಲ್ಲಿಕಾರ್ಜುನ ದೇವಾಲಯ ಮಾತ್ರ ಕಲಾದೃಷ್ಟಿಯಿಂದ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ನವರಂಗದ ಸುತ್ತ ತೆರೆದ ಜಗಲಿ ಇದೆ. ಅಲ್ಲಲ್ಲಿ ಕಟಾಂಜನಗಳಿವೆ. ನವರಂಗದ ಮೇಲುಚಾವಣಿಗೆ ಹಾಕಿದ ಕಲ್ಲುಚಪ್ಪಡಿಗಳ ತಳಭಾಗದಲ್ಲಿ ಅನೇಕ ಚಿತ್ರಗಳಿವೆ, ಈ ದೇವಾಲಯದ ಕಂಬಗಳ ತಳಭಾಗದಲ್ಲಿ

---

5 *Ibid.*, Sa. 127
6 *Ibid.*
7 *Ibid.*, Sa. 15
8 *Ibid.*, Sa. 127
9 *Ibid.*
10 ಕೆಳದಿನೃಪವಿಜಯಂ

೮ ಮುಖ, ಮೇಲುಭಾಗದಲ್ಲಿ ೧೬ ಮುಖಗಳನ್ನು ಪಡೆದಿವೆ. ಇಲ್ಲಿರುವ ನಂದಿವಿಗ್ರಹವು ಸುಂದರ ಶಿಲ್ಪಕ್ಕೆ ಉತ್ತಮ ಮಾದರಿಯಾಗಿದೆ.

ಐತಿಹಾಸಿಕವಾಗಿ ಈ ದೇವಾಲಯದ ಬಗ್ಗೆ ಹೆಚ್ಚು ವಿವರಗಳು ದೊರೆಯದಿದ್ದರೂ ಜನರು ಮಾತ್ರ ಇವನ್ನು ತಂದೆ–ಮಕ್ಕಳ ದೇವಾಲಯಗಳೆಂದೇ ಕರೆಯುತ್ತಾರೆ.

ಸುಮಾರು ೮೦೦ ವರ್ಷಗಳ ಹಿಂದೆ ಕಟ್ಟಿರುವ ಪ್ರಾಚೀನ ಸ್ಮಾರಕಗಳನ್ನು ಉಳಿಸಿಕೊಳ್ಳಬೇಕಾದದ್ದು, ಬಾಳೆಯಮ್ಮ ವೆಗ್ಗಡೆಯಂತಹ ಶಿಲ್ಪಕಲಾಭಿಮಾನಿ ಮಾಂಡಲಿಕನನ್ನು ಇತಿಹಾಸದ ಪುಟಗಳಲ್ಲಿ ದಾಖಲಿಸಿಕೊಳ್ಳಬೇಕಾದದ್ದು ಜನತೆಯ ಹಾಗೂ ಇತಿಹಾಸಕಾರರ ಕರ್ತವ್ಯವೂ ಆಗಿದೆ.